# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 1242
2. ಸದಸ್ಯರ ಹೆಸರು : ಶ್ರೀ ಸುನೀಲಗೌಡ ಬಸನಗೌಡ ಪಾಟೀಲ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು )
3. ಉತ್ತರಿಸಬೇಕಾದ ದಿನಾಂಕ : 22.09.2021
4. ಉತ್ತರಿಸುವ ಸಚಿವರು : ಮಾನ್ಯ ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಸಚಿವರು.

| ಕ್ರ ಸಂ | ಉಪ ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ವಿಮಾನ ನಿಲ್ದಾಣದ ಕಾಮಗಾರಿಯು ಕುಂಠಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿಜಯಪುರ ವಿಮಾನ ನಿಲ್ದಾಣದ ಕಾಮಗಾರಿಯು ಕುಂಠಿತಗೊಂಡಿರುವುದಿಲ್ಲ. ಪ್ರಸ್ತುತ ಹಂತ-1ರ ಕಾಮಗಾರಿಗಳು ಪ್ರಗತಿಯಲ್ಲಿವೆ. |
| ಆ) | ಸದರಿ ಕಾಮಗಾರಿಗೆ ಅನುದಾನದ ಕೊರತೆ ಇದೆಯೇ; | ಸದರಿ ಕಾಮಗಾರಿಗೆ ಅನುದಾನದ ಕೊರತೆ ಇರುವುದಿಲ್ಲ. |
| ಇ) | ಸದರಿ ಕಾಮಗಾರಿಯ ಅಂದಾಜು ಮೊತ್ತ ಎಷ್ಟು; ಮತ್ತು ಇಲ್ಲಿಯವರೆಗೆ ಖರ್ಚಾದ ಹಣ ಎಷ್ಟು; ಬಾಕಿ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು; ಸದರಿ ಕಾಮಗಾರಿಯ ಸಂಪೂರ್ಣ ಮಾಹಿತಿಯೊಂದಿಗೆ ಅಂದಾಜು ಪತ್ರಿಕೆ ಹಾಗೂ ಸಂಬಂಧಪಟ್ಟ ದಾಖಲೆಗಳ ವಿವರ ನೀಡುವುದು? | ವಿಜಯಪುರ ವಿಮಾನ ನಿಲ್ದಾಣದ ಅಭಿವೃದ್ಧಿಯನ್ನು ರೂ.220.00 ಕೋಟಿ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗುತ್ತಿದೆ. ಹಂತ-1ರ ಕಾಮಗಾರಿಗಳನ್ನು ರೂ.95.00 ಕೋಟಿ ವೆಚ್ಚದಲ್ಲಿ ಕೈಗೊಳ್ಳಲಾಗುತ್ತಿದ್ದು, ರೂ.25.00ಕೋಟಿಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಇಲ್ಲಿಯವರೆಗೆ ರೂ. 23.50 ಕೋಟಿಗಳು ಖರ್ಚಾಗಿರುತ್ತದೆ.<br><br>ವಿಜಯಪುರ ವಿಮಾನ ನಿಲ್ದಾಣದ ಕಾಮಗಾರಿಗಳು 2022ರ ಡಿಸೆಂಬರ್ ಅಂತ್ಯದೊಳಗೆ ಪೂರ್ಣಗೊಂಡು ವಿಮಾನ ಹಾರಾಟ ಕಾರ್ಯಾಚರಣೆಯನ್ನು ನಿರೀಕ್ಷಿಸಲಾಗಿದೆ.<br><br>ಹಂತ-1ರ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |

ಸಂಖ್ಯೆ:ಮೂಅಇ 112 ರಾಅವಿ 2021

(ವಿ.ಸೋಮಣ್ಣ)
ವಸತಿ ಹಾಗೂ ಮೂಲಸೌಲಭ್ಯ
ಅಭಿವೃದ್ಧಿ, ಸಚಿವರು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಸುನೀಲಗೌಡ ಬಸನಗೌಡ ಪಾಟೀಲ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1242ರ ಉಪ ಪ್ರಶ್ನೆ (ಇ)ರ ಅನುಬಂಧ

| ಕ್ರ.ಸಂ. | ಕಾಮಗಾರಿಗಳು | ಅಂದಾಜು ವೆಚ್ಚ |
|---|---|---|
| 1 | Airfield Pavements, City Side Roads / Pavements, Air Side Roads / Pavements and Miscellaneous. | ರೂ.95.00 ಕೋಟಿ |
| 2 | Airside Box Culvert under Runway, Pipe Culverts, Cable crossings and Airside CC drains | |